

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1289(1632)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು

ವಿಷಯ : ಮಂಡ್ಯ ಜಿಲ್ಲೆಯಲ್ಲಿ ಪೊಲೀಸ್ ಠಾಣೆಗಳ ಮೂಲಭೂತ ಸೌಲಭ್ಯಗಳ ಬಗ್ಗೆ

(ಅ) ಮಂಡ್ಯ ಜಿಲ್ಲೆಯಲ್ಲಿ ಒಟ್ಟು ಎಷ್ಟು ಪೊಲೀಸ್ ಠಾಣೆಗಳಿವೆ; ಅವು ಯಾವುವು; (ವಿವರ ನೀಡುವುದು)

(ಆ) ಈ ಪೈಕಿ ಪ್ರತಿ ಠಾಣೆಗೆ ಮಂಜೂರಾದ ಹುದ್ದೆ ಎಷ್ಟು; ಹಾಗೂ ಖಾಲಿಯಿರುವ ಹುದ್ದೆ ಎಷ್ಟು; ಖಾಲಿಯಿರುವ ಹುದ್ದೆಯನ್ನು ಯಾವಾಗ ಭರ್ತಿ ಮಾಡಲಾಗುವುದು; (ತಾಲ್ಲೂಕುವಾರು ಪೂರ್ಣ ವಿವರ ನೀಡುವುದು)

(ಇ) ಮಂಡ್ಯ ಜಿಲ್ಲೆಯಲ್ಲಿ ಯಾವ ಯಾವ ಪೊಲೀಸ್ ಠಾಣೆಯಲ್ಲಿ ಎಷ್ಟು ಹೋಂ ಗಾರ್ಡ್ ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ;ಇವರ ಭವಿಷ್ಯದ ದೃಷ್ಠಿಯಿಂದ ಇವರನ್ನು ಖಾಯಂಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇವರಿಗೆ ಮಾಸಿಕ ನಿಗದಿಪಡಿಸಿರುವ ವೇತನವೆಷ್ಟು; ಇವರ ವೇತನ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವಾಗ ವೇತನ ಹೆಚ್ಚಳ ಮಾಡಲಾಗುವುದು; (ಪೂರ್ಣ ವಿವರ ನೀಡುವುದು)

(ಈ) ಕಳೆದ ಮೂರು ವರ್ಷಗಳಲ್ಲಿ ಮಂಡ್ಯ ಜಿಲ್ಲೆಯಲ್ಲಿ ಪೊಲೀಸ್ ಠಾಣೆಗಳ ಮೂಲಭೂತ ಸೌಲಭ್ಯಕ್ಕಾಗಿ ಮಂಜೂರು ಮಾಡಿರುವ ಅನುದಾನ ಎಷ್ಟು; (ವಿವರ ನೀಡುವುದು) ಮಂಜೂರಾದ ಅನುದಾನದಲ್ಲಿ ಕೈಗೊಂಡಿರುವ ಕಾಮಗಾರಿಗಳಾವುವು; ಯಾವ ಯಾವ ಕಾಮಗಾರಿಗೆ ಎಷ್ಟೆಷ್ಟು ಅನುದಾನ ಬಳಕೆ ಮಾಡಲಾಗಿದೆ; (ವಿವರ ನೀಡುವುದು)

(ಉ) ಕಳೆದ ಮೂರು ವರ್ಷಗಳಿಂದ ಮಂಡ್ಯ ಜಿಲ್ಲೆಯಲ್ಲಿ ಯಾವ ಯಾವ ಠಾಣೆಯಲ್ಲಿ ಎಷ್ಟೆಷ್ಟು ಪ್ರಕರಣಗಳು ದಾಖಲಾಗಿವೆ; ಯಾವ ಯಾವ ವಿಧದ ಪ್ರಕರಣಗಳು ದಾಖಲಾಗಿವೆ; ಈ ಪೈಕಿ ಪತ್ತೆ ಹಚ್ಚಿದ ಪ್ರಕರಣಗಳು ಎಷ್ಟು; ಪತ್ತೆ ಹಚ್ಚಲಾಗದ ಪ್ರಕರಣಗಳು ಎಷ್ಟು; ಅವುಗಳನ್ನು ಯಾವ ಕಾರಣದಿಂದಾಗಿ ಪತ್ತೆ ಹಚ್ಚಲು ಸಾಧ್ಯವಾಗಿರುವುದಿಲ್ಲ? (ಪೂರ್ಣ ವಿವರ ನೀಡುವುದು)